ಚಂದನ್ (ಸಿಲ್ವಿಯಾ)*

# ಹರಿಹರದ ಸಂಗಮೇಶ್ವರ ದೇವಾಲಯದ ಪರಿಚಯ

ಸಾಮಾನ್ಯವಾಗಿ ಐತಿಹಾಸಿಕವಾಗಿಯೂ ಪೌರಾಣಿಕವಾಗಿಯೂ ಪ್ರಸಿದ್ಧವಾಗಿರುವ ಹರಿಹರದ ಹೆಸರು ನಮಗೆಲ್ಲರಿಗೂ ಅಲ್ಲಿಯ ಬೃಹತ್ ದೇವಾಲಯವಾಗಿರುವ ಹರಿಹರೇಶ್ವರ ದೇವಾಲಯದ ನೆನಪು ಮಾಡಿಕೊಡುತ್ತದೆ. ಇದು ಹೊಯ್ಸಳರ ಕಾಲದ ಭವ್ಯ ಕಲಾಕೃತಿಯಾಗಿರುವುದು ನಿಜ, ಆದರೆ ಹರಿಹರವು ಹಿಂದಿನಿಂದಲೂ ಪವಿತ್ರ ಕ್ಷೇತ್ರವೆಂದೂ, ದಕ್ಷಿಣ ಕಾಶಿ ಎಂದೂ ಪ್ರಸಿದ್ಧವಾಗಿರುವ ಇಲ್ಲಿ ಹರಿಹರೇಶ್ವರ ದೇವಾಲಯವನ್ನು ಹೊರತುಪಡಿಸಿ ಪುರಾತನ ಕಾಲದ ಇನ್ನೂ ಚಿಕ್ಕ ಪುಟ್ಟ ದೇವಾಲಯಗಳಿವೆ. ಹರಿಹರೇಶ್ವರ ದೇವಾಲಯದ ಶಿಲ್ಪಕಲೆ ಹಾಗೂ ವಿಸ್ತಾರವು ಇಂತಹ ಸಣ್ಣ ಪುಟ್ಟ ದೇವಾಲಯಗಳನ್ನು ಇತಿಹಾಸಕಾರರಿಂದ ದೂರವಿರಿಸಿರುವುದೇ ಇದಕ್ಕೆ ಮುಖ್ಯ ಕಾರಣವಿರಬೇಕು. ಈಗ ನಾನಿಲ್ಲಿ ಹರಿಹರ ತುಂಗಾಭದ್ರಾ ಹಾಗೂ ಕುಮುದ್ವತಿ ನದಿಗಳ ಸಂಗಮದಲ್ಲಿ ಆಗಲೇ 90ರಷ್ಟು ಭೂಗತ ಹೊಂದಿರುವ ಒಂದು ಸಣ್ಣ ದೇವಾಲಯದ ಕಡೆ ನಿಮ್ಮ ಗಮನ ಸೆಳೆಯಲು ಇಚ್ಛಿಸುತ್ತೇನೆ.

ಸದರಿ ದೇವಾಲಯವು ಹರಿಹರದ ನದಿ ತಟದಲ್ಲಿ ನದಿಯ ಹರಿಯುವ ಕಡೆಯಿಂದ ೧೦–೧೨ ಅಡಿಗಳಷ್ಟೇ ದೂರದಲ್ಲಿದೆ. ಆದರೂ ಈ ದೇವಾಲಯ ವರ್ಷದ ಹೆಚ್ಚಿನ ದಿನಗಳಲ್ಲಿ ಜಲ ಸಮಾಧಿ ಹೊಂದಿರುತ್ತದೆ. ಬೇಸಿಗೆ ಕಾಲ ಬಂದಾಗ ನೀರಿನ ಮಟ್ಟ ಇಳಿದಾಗ ದೇವಾಲಯದ ಶಿಖರವಷ್ಟೇ ಕಂಡು ಬರುತ್ತದೆ. ಈಗಲೂ ದೇವಾಲಯದ ಭಕ್ತಾದಿಗಳ ಕೃಪೆಯೇ ಈ ದೇವಾಲಯ ಇನ್ನೂ ಉಳಿದಿರಲು ಕಾರಣವಾಗಿದೆ. ಎಲ್ಲಾ ನೀರು ಇಳಿದು ಹೋದ ನಂತರ ಸಂಗಮೇಶ್ವರನ ಭಕ್ತಾದಿಗಳು ದೇವಾಲಯದ ದ್ವಾರಕ್ಕೆ ಬಂದು ಬಿದ್ದಿರುವ ಮರಳು ಕೆಸರು ಕಸ ಕಡ್ಡಿಗಳನ್ನು ತೆಗೆದು ದೇವಾಲಯ ಸ್ವಚ್ಛಗೊಳಿಸಿ ಪೂಜೆಗೆ ಯೋಗ್ಯ ಮಾಡುತ್ತಾರೆ. ಈ ದೇವಾಲಯವನ್ನು ಇಲ್ಲಿಯ ಜನರು ಸಂಗಮೇಶ್ವರ ದೇವಾಲಯವೆಂದೇ ಕರೆಯುತ್ತಾರೆ. ಇಲ್ಲಿ ವರುಷಕ್ಕೊಮ್ಮೆ ಚಿಕ್ಕಮಟ್ಟದ ಜಾತ್ರೆ ಶಿವರಾತ್ರಿಯಾದ ನಂತರದ ದಿನಗಳಲ್ಲಿ ನಡೆಯುತ್ತದೆ. ಈ ಬಗ್ಗೆ ಕೆಲವು ಜನರು ಇದನ್ನು ಮಹೇಶ್ವರನ ಜಾತ್ರೆ ಎಂದು ಕರೆಯುವುದುಂಟು.

ಸದರಿ ದೇವಾಲಯವು ಕಲ್ಲಿನ ಚಿಕ್ಕ ದೇವಾಲಯವಾಗಿದ್ದು ಇದರ ಒಳಗೆ ಅಂದರೆ ಗರ್ಭ ಗುಡಿಯಲ್ಲಿ ಒಂದು ಶಿವಲಿಂಗವಿದೆ. ಎದುರಿಗೆ ಒಂದು ನಂದಿ ವಿಗ್ರಹವಿದೆ, ದೇವಾಲಯದ ಶಿಖರ ಪಿರಮಿಡ್ ಆಕಾರವಿದ್ದು ಭಕ್ತರು ಆಗಾಗ್ಗೆ ಇದಕ್ಕೆ ಸುಣ್ಣ ಬಳಿದು ಅದರ ನೈಜ ಕಲಾಕೃತಿಗಳು ಮುಚ್ಚಿ ಹೋಗಿವೆ. ಒಬ್ಬ ಮನುಷ್ಯ ಒಳಗೆ ಹೋಗಬಹುದಾದಷ್ಟೇ ಮುಖದ್ವಾರವನ್ನು ಸ್ವಚ್ಛಗೊಳಿಸಿದುದರಿಂದ ಇದರ ದ್ವಾರ ಬಾಗಿಲು ಹೊರ

* ಶ್ರವಣ್ ಟುಟೋರಿಯಲ್ಸ್ ನಂ., 312, 'ಇ' ವಿಭಾಗ ನಡುವಲ್‌ಪೇಟೆ, ಹರಿಹರ-577601

ಆವರಣದ ಗೋಡೆಗಳೆಲ್ಲವೂ ಮಣ್ಣು ಕಸ ಕಡ್ಡಿಗಳಿಂದ ಮುಚ್ಚಿ ಯಾವ ಶಾಸನಾಧಾರಗಳನ್ನೂ ಪಡೆಯುವುದು ಕಷ್ಟವಾಗಿದೆ. ಆದರೂ ೧೧ನೇ ಶತಮಾನದಲ್ಲಿ ಚಾಲುಕ್ಯ ವಿಕ್ರಮ ಜಗದೇವ ಮಲ್ಲನ ಒಂದು ಶಾಸನ ಈಗಾಗಲೇ ಇತಿಹಾಸಕಾರರು ಓದಿರುವುದು ಇದಕ್ಕೆ ಸಂಬಂಧ ಪಟ್ಟಿದೆ ಎಂಬುದು ನನ್ನ ಊಹೆ. ಈ ಶಾಸನದ ಪ್ರಕಾರ ಗುಹಾರಣ್ಯ, ದಕ್ಷಿಣ ಕಾಶಿ ಎಂದು ಪ್ರಸಿದ್ಧವಾದ ಕೂಡಲೂರು ಕ್ಷೇತ್ರದಲ್ಲಿ ತಪಸ್ಸಿಗಾಗಿ ಬರುವ ಋಷಿ ಗಳಿಗೆ ಯೋಗೀಶ್ವರ ದೇವಾಲಯವಿತ್ತೆಂದೂ, ಈ ದೇವಾಲಯಕ್ಕೆ ಜಗದೇವ ಮಲ್ಲನು ಬೆಳ್ಳೊಡಿ ಹಾಗೂ ಕೇಕರಕೊಳ (ಕಕ್ಕರಗೋಳದ) ವ್ಯವಸಾಯ ಜಮೀನನ್ನು ದತ್ತಿ ಬಿಟ್ಟಿರುವುದಾಗಿಯೂ ತಿಳಿದು ಬರುತ್ತದೆ.

ಕೂಡಲೂರು ಎಂದರೆ ಕೂಡಲಿ ಅಥವಾ ನದಿಗಳ ಸಂಗಮ ಪ್ರದೇಶವೆಂಬ ಅರ್ಥವನ್ನು ಕೊಡುತ್ತದೆ. ಮೂರು ನದಿಗಳು ಈ ಪ್ರದೇಶದಲ್ಲಿ ಸಂಗಮಗೊಳ್ಳುವುದ ರಿಂದ ಈ ಹೆಸರು ಈ ಪ್ರದೇಶಕ್ಕೆ ಒಪ್ಪಿಗೆಯಾಗಿದೆ. ಎರಡನೆಯದಾಗಿ ಕೂಡಲೂರು ಹಾಗೂ ಹರೀಪಪುರ ಅಥವಾ ಹರಿಹರ ಎರಡೂ ಒಂದೇ ಆಗಿವೆಯೇ ? ನನ್ನ ಅನಿಸಿಕೆ ಪ್ರಕಾರ ಹರೀಪಪುರ ಎಂದರೆ ನಗರ ಪ್ರದೇಶ ವಾಗಿದೆ. ಶಾಸನಗಳಲ್ಲಿ ಕಂಡು ಬರುವ ಕೂಡಲೂರು ಈ ನಗರ ವ್ಯಾಪ್ತಿಗೆ ಸೇರಿದ ಒಂದು ಚಿಕ್ಕ ಗ್ರಾಮವಾಗಿರಲೂ ಬಹುದು. ಈಗ ಸಂಗಮೇಶ್ವರ ದೇವಾಲಯವಿರುವ ಪ್ರದೇಶವೇ ಕೂಡಲೂರು ಗ್ರಾಮವಾಗಿರಬಹುದು. ನದಿಯ ಪಾತ್ರ ಅಗಲವಾದಂತೆ ಈ ಗ್ರಾಮ ನಾಶ ವಾಗಿರಬೇಕು. ಸಂಗಮೇಶ್ವರ ದೇವಾಲಯವು ಭೂ ಸಮಾಧಿಯಾಗಿರುವುದನ್ನು ಹಾಗೂ ಇದು ಮಳೆಗಾಲ ದಲ್ಲಿ ಪೂರ್ತಿಯಾಗಿ ಜಲಸಮಾಧಿ ಹೊಂದುತ್ತಿರುವುದನ್ನು ಗಮನದಲ್ಲಿಟ್ಟುಕೊಂಡರೆ ಈ ಪ್ರದೇಶದಲ್ಲಿ ಒಂದು ಚಿಕ್ಕ ಗ್ರಾಮವೇ ನಾಶವಾಗಿದ್ದಿರಬೇಕು. ಉತ್ಖನನಕಾರರು ಈ ಬಗ್ಗೆ ಆಸಕ್ತಿ ವಹಿಸಿದಲ್ಲಿ ಹರಿಹರದಲ್ಲಿಯ ಈ ಸಂಗಮೇಶ್ವರನ ದೇವಾಲಯದ ಬಳಿ ಸಮೀಕ್ಷೆ ನಡೆಸಿದಲ್ಲಿ ಹರಿಹರದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯ ವನ್ನೇ ಬರೆಯಬಹುದು.